ಹರಾಜು ಮಾಡಲು ಉದ್ದೇಶಿಸಿರುವ ನಿರುಪಯುಕ್ತ ವಾಹನಗಳ ವಿವರಗಳು

| ಕ್ರ.ಸಂ. | ವಾಹನಗಳ ನೋಂದಣಿ ಸಂಖ್ಯೆ | ಉತ್ಪಾದಕರು | ಉತ್ಪಾದಕ ವರ್ಷ | ವಾಹನಗಳ ವಿಧ | ಇಂಧನ ಬಳಕೆ |
|---|---|---|---|---|---|
| 1 | ಸಿಕೆಜಿ 357 | ಮಹೇಂದ್ರ | 1986 | ಜೀಪು | ಡೀಜಲ್ |
| 2 | ಸಿಎಜಿ 6653 | ಸ್ಟ್ಯಾಂಡರ್ಡ್ 20 | 1984 | ಪಿಕಪ್ ವ್ಯಾನ್ | ಡೀಜಲ್ |
| 3 | ಸಿಎಜಿ 756 | ಅಂಬಾಸಿಡರ್ | 1983 | ಕಾರ್ | ಪೆಟ್ರೋಲ್ |
| 4 | ಎಂಇಎ 9502 | ಎನ್‌ಫೀಲ್ಡ್ | 1975 | ಮೋಟಾರ್ ಸೈಕಲ್ | ಪೆಟ್ರೋಲ್ |
| 5 | ಎಂಇಎ 9503 | ಎನ್‌ಫೀಲ್ಡ್ | 1975 | ಮೋಟಾರ್ ಸೈಕಲ್ | ಪೆಟ್ರೋಲ್ |

## ಹರಾಜಿನ ಷರತ್ತು ಮತ್ತು ನಿಬಂಧನೆಗಳು

1. ಮೊಹರು ಮಾಡಿದ ಟೆಂಡರ್ (ಸೀಲ್ಡ್ ಕವರ್) ಲಕೋಟೆಯನ್ನು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ, ಬೆಂಗಳೂರುರವರ ವಿಳಾಸಕ್ಕೆ ಅನುಪಯುಕ್ತ ವಾಹನಗಳ ಖರೀದಿಗಾಗಿ ಟೆಂಡರ್ ಎಂದು ಬರೆದು ಕಳುಹಿಸಬೇಕು.
2. ಅತೀ ಹೆಚ್ಚಿನ ಬೆಲೆಯನ್ನು ಅಂಕಿ ಮತ್ತು ಅಕ್ಷರದಲ್ಲಿ ಬರೆದಿರಬೇಕು.
3. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
4. ಬಿಡ್‌ದಾರರು/ಟೆಂಡರ್‌ದಾರರು ರೂ. 5000 (ಐದು ಸಾವಿರ) ಗಳನ್ನು ಹರಾಜು ಪ್ರಾರಂಭಿಸುವುದಕ್ಕಿಂತ ಮೊದಲು ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಕೋರಮಂಗಲ ಬೆಂಗಳೂರುರವರ ಹೆಸರಿನಲ್ಲಿ ಠೇವಣಿಯಾಗಿ ಇಡತಕ್ಕದ್ದು.
5. ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೆ ಬಿಡ್‌ನ್ನು ಮುನ್ಸೂಚನೆಯಿಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತಾರೆ.
6. ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 23.7.2004ರ ಅಪರಾಹ್ನ 17.00 ಘಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.
7. ಕಮಾಂಡೆಂಟ್ ಮತ್ತು ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿಯನ್ನು ತುಂಬಿದ ಟೆಂಡರ್‌ದಾರರು / ಸವಾಲುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ದರವನ್ನು) ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್‌ಗಳನ್ನು ಕಮಾಂಡೆಂಟ್‌ರವರು ಸಾರ್ವಜನಿಕರ ಸಮಕ್ಷಮದಲ್ಲಿ ಸೀಲ್ಡ್ ಕವರ್ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ದರವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್ / ಸವಾಲುದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್‌ದಾರರು / ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡ 25 ರಷ್ಟು ಹಣವನ್ನು (ಠೇವಣಿ ಹೊರತುಪಡಿಸಿ) ಸ್ಥಳದಲ್ಲಿಯೇ ತುಂಬಬೇಕು. ಉಳಿದ ಹಣವನ್ನು ಮಾನ್ಯ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ಸದರಿ ದರವನ್ನು ಒಪ್ಪಿದ ನಂತರವೇ ಸಂಪೂರ್ಣ ಹಣವನ್ನು (ತೆರಿಗೆ ಸೇರಿ) ಪಾವತಿ ಮಾಡಿ ಹರಾಜಿನಲ್ಲಿ ಪಡೆಯಲಾದ ವಾಹನಗಳನ್ನು 3 ದಿನಗಳೊಳಗಾಗಿ ತಮ್ಮ ಸ್ವಂತ ಖರ್ಚಿನಿಂದ ತೆಗೆದುಕೊಂಡು ಹೋಗುವುದು. ತಪ್ಪಿದಲ್ಲಿ ಅವರು ತುಂಬಿರುವ ಶೇಕಡ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು. ಹಾಗೂ ಮತ್ತೊಮ್ಮೆ ಹೊಸದಾಗಿ ಅಧಿಸೂಚನೆಯನ್ನು ಹೊರಡಿಸಿ ಸದರಿ ವಾಹನಗಳನ್ನು ಮರು ಹರಾಜು ಮಾಡಲಾಗುವುದು.
10. ಎಲ್ಲಾ ಹಣವನ್ನು ಕಮಾಂಡೆಂಟ್‌ರವರ ಕಛೇರಿಗೆ ನಗದು ರೂಪದಲ್ಲಿ ತಂಬಬೇಕು. ಚೆಕ್ಕುಗಳ ಮೂಲಕ ತುಂಬಿದ ಹಣವನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್/ಸವಾಲುದಾರರಿಗೆ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು.
12. ಸರ್ಕಾರದ ವಾಹನಗಳ ಹರಾಜಿನಲ್ಲಿ ಭಾಗವಹಿಸುವ ಟೆಂಡರ್ / ಸವಾಲುದಾರರು ಸರ್ಕಾರಿ ನಿಯಮವನ್ನು ಪಾಲಿಸಬೇಕು.
13. ಮೋಟಾರು ವಾಹನಗಳ ತೆರಿಗೆಯನ್ನು ಚಾಲ್ತಿಯಲ್ಲಿರುವ ದರ / ನಿಯಮಗಳ ಮೇಲೆ ವಸೂಲು ಮಾಡಲಾಗುವುದು.
14. ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹ ಟೆಂಡರ್ : ಸವಾಲುದಾರರು ಮುಂಗಡವಾಗಿ ಕಟ್ಟಲ್ಪಟ್ಟ ಠೇವಣಿ ಹಣದಲ್ಲಿ ವಸೂಲಿ ಮಾಡುವ ಅಧಿಕಾರವು ಕಮಾಂಡೆಂಟ್‌ರವರ ತೀರ್ಮಾನಕ್ಕೆ ಒಳಪಟ್ಟಿರುತ್ತದೆ. ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನುಬದ್ಧವಾಗಿ ಕ್ರಮ ತೆಗೆದುಕೊಳ್ಳಲಾಗುವುದು.
15. ಹರಾಜಿನಲ್ಲಿ ಯಾವುದೇ ಟೆಂಡರ್ ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕಮಾಂಡೆಂಟ್‌ರವರು ಹೊಂದಿರುತ್ತಾರೆ.
16. ವಾಹನಗಳನ್ನು ಹೇಗಿದೆಯೋ ಹಾಗೆ ಈಗ ಇರುವ ಸ್ಥಳದಲ್ಲಿಯೇ ಹರಾಜು ಮಾಡಲಾಗುವುದು. ಯಾವುದೇ ಕಾರಣಕ್ಕೂ ಸ್ಕ್ರ್ಯಾಪ್ (ಬಿಡಿಭಾಗ) ವೆಂದು ಪರಿಗಣಿಸಲಾಗುವುದಿಲ್ಲ.
17. ಮೇಲೆ ತಿಳಿಸಿರುವ ಹರಾಜಿನ ದಿಸೆಯಿಂದ ಯಾವುದೇ ತರಹದ ವಾದ ವಿವಾದಗಳು ಉದ್ಭವಿಸಿದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು ಕೆ.ಎಸ್.ಆರ್.ಪಿ., ಬೆಂಗಳೂರು ರವರು ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.
18. ಇಚ್ಛೆಯುಳ್ಳ ಟೆಂಡರ್ / ಸವಾಲುದಾರರು ಹರಾಜು ಮಾಡಲಿರುವ ನಿರುಪಯುಕ್ತ ವಾಹನಗಳನ್ನು ಯಥಾಸ್ಥಿತಿಯಲ್ಲಿ ಕಮಾಂಡೆಂಟ್‌ರವರ ಕಛೇರಿ, 3ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಈ ಘಟಕದ ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ಕಛೇರಿಯ ವೇಳೆಯಲ್ಲಿ ನೋಡಬಹುದು.

ಕಮಾಂಡೆಂಟ್

ಪಿ.ಆರ್. 306 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು-34.

**P.N. MAYOHALL**

**IN THE COURT OF THE IV ADDL. CITY CIVIL & SESSIONS JUDGE : MAYOHALL, BANGALORE**

**G & W.C. 15014/2003, H.G. 21.7.2004**

**Petitioner:** Syed Basheet Ahamed S/o late Syed Yusuf, 47 years, R/o No. 532, 2nd Main, A-Block, II Stage, Rajajinagar, Bangalore.

V/S

**Respondent:** -Nil-

**PUBLIC NOTICE**

Notice is hereby given that a petition has been made to this court under Sec. 51, 52 and 53 of the Mental Health Act, for appointment of the petitioner as Guardian for Syed Afroz son of Syed Yusuff, who retired from service on 30.9.88 and is no more, and accord permission to drawn family pension of Syed Yusuff on behalf of Syed Afroz.

The Court has fixed 21.7.2004 for the hearing of the said petition, all persons claiming to have any interest may come and see the proceedings before the appointment of the petitioner as guardian of Syed Afroz.

Given under my hand and the seal of the Court, this the 15th day of December 2003.

By Order of the Court,
PD-61 Asst. Registrar,
City Civil Court, Mayohall, Bangalore.

**P.N. MAYOHALL**

**IN THE COURT OF THE IV ADDL. CITY CIVIL JUDGE : MAYOHALL, BANGALORE**

**G & W.C. NO. 15021/2004, HG : 14.7.2004.**

**Petitioner:** Smt Premalatha W/o. Devasagayam, 42 years, R/o No. 35, G-Street, Shanthinagar, Bangalore-27.

V/S

**Respondent:** -Nil-

**PUBLIC NOTICE**

Notice is hereby given that a petition have been made to this court under Section 7 and 10 of the Guardians and Wards Act, for appointment of the petitioner as the Guardian to the minor child Shalini D/o late K. Muniraju who died on 26.10.2001.

The Court has fixed the late of hearing on 14.7.2004 of the said petition. All persons claiming to have any interest may come and see the proceedings before the appointment of the Petitioner as Guardian.

Given under my hand and the seal of the Court, this the 2nd July 2004.

By Order of the Court,
PD-62 Asst. Registrar,
City Civil Court, Mayohall, Bangalore.

**IN THE COURT OF THE CITY CIVIL JUDGE AT BANGALORE**

**IN THE MATTER OF ASSETS OF LATE MRS. B.V. PADMINI**

**P&S.C. NO. 42/2004 CCH-II**

**Petitioner:** Sri B. Venkatanarayana Setty S/o. B. Late Narayana Setty, Hindu, aged about 90 years, No. 156, 5th Cross, Wilson Garden, Bangalore-560 027.

V/S

**Respondent:** -Nil-

**PUBLIC NOTICE**

Whereas the above named Petitioner has filed a petition under Section 371 and 372 of Indian Succession Act, for grant of Succession Certificate in respect of Schedule Immoveable property mentioned below owned and possessed by Late Mrs. B.V. Padmini, Daughter of Petitioner, who is missing since seven years. If anybody having claim or objections for grant of Succession Certificate in favour of Petitioner, are hereby informed to appear before the Court on 27.7.2004 at 11 a.m. to answer the claim of the Petitioner, failing which the matter will be heard and decided, in accordance with law.

Given under my hand and seal of this Hon'ble Court by this 21st day of June 2004.

**SCHEDULE**

All that House Property bearing No. 218/54, 11th Cross Road, Wilson Garden, Bangalore-560 027 measuring North by 80 feet (45 feet and 35 feet) South by 80 feet, East by 50 feet and West by 25 feet and bounded on:

| | |
|---|---|
| **North** | a) 5 feet wide (for 45 feet West to East) common passage from 11th Cross Road for the use of the Schedule property / remaining part of the property No. 218/54. |
| | b) 10 feet wide (for remaining length) common passage where water tap and washing place is provided for common use for the Schedule Property / remaining part of the property No. 218/54. |
| **South** | Private Property No. 217 |

| | |
|---|---|
| **East** | 5 feet wide common passage for the use of the Schedule Property / remaining part of the property No. 218/54. After the 5 wide passage is the remaining portion of the property No. 218/54, other than the Schedule Property. |
| **West** | 11th Cross Road, Wilson Garden. |

By Order of the Court,
Asst. Registrar,
City Civil Court, Bangalore.

PD-63

**ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ (ಆಡಳಿತ), ಬೆಂಗಳೂರು**

**ಅಧಿಸೂಚನೆ**

**ದಿನಾಂಕ: 26ನೇ ಜೂನ್ 2004**

ಕೆ.ಜಿ. ಹಳ್ಳಿ ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುತ್ತಿರುವ ಶ್ರೀ **ಗದಿಗೆಪ್ಪ ಮಹಾದೇವಪ್ಪ ಕ್ಷವರದ,** ಸಿ.ಪಿ.ಸಿ. 8656, ಇವರ ಹೆಸರನ್ನು **ಗದಿಗೆಪ್ಪ ಮಹಾದೇವಪ್ಪ ಕಿತ್ತೂರು** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ. 114 ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ (ಆಡಳಿತ), ಬೆಂಗಳೂರು.

**ಜಿಲ್ಲಾ ಶಸ್ತ್ರಚಿಕಿತ್ಸಕರವರ ಕಛೇರಿ, ಚಿತ್ರದುರ್ಗ**

**ಸಂಖ್ಯೆ: ಜಿಆಚಿ:ಜಿಎನ್‌ಎಲ್(1):10:2003-04, ದಿನಾಂಕ: 2ನೇ ಜುಲೈ 2004**

**ವಿಷಯ:** 2004-05ನೇ ಸಾಲಿಗೆ ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ ಇಲ್ಲಿಗೆ ಆಹಾರ ಪದಾರ್ಥಗಳು, ಪ್ರಥಮ ದರ್ಜೆ ಬ್ರೆಡ್ ಹಾಗೂ ಹೆಚ್.ಎನ್.ಎಸ್. ವಸ್ತುಗಳನ್ನು ಸರಬರಾಜು ಮಾಡಲು ಟೆಂಡರ್ ಕರೆಯುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಪಿಎಲ್ಎಂ 196 ಪಿಟಿಡಿ 64, ದಿನಾಂಕ: 30.12.1964.
2) ಈ ಆಸ್ಪತ್ರೆಯ ಟೆಂಡರ್ ಪ್ರಕಟಣೆ ಸಂಖ್ಯೆ: ಜಿಆಚಿ:ಜಿಎನ್‌ಎಲ್(1): 10:2003-04, ದಿನಾಂಕ: 5.5.2004.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ, ಇಲ್ಲಿಗೆ (ಟೆಂಡರ್ ಅಂಗೀಕರಿಸಲಾಗುವ ದಿನಾಂಕದಿಂದ 31.3.2005 ರ ಅವಧಿಗೆ) ಬೇಕಾಗುವ ಆಹಾರ ಪದಾರ್ಥಗಳು ಪ್ರಥಮ ದರ್ಜೆ ಬ್ರೆಡ್ ಹಾಗೂ ಹೆಚ್.ಎನ್.ಎಸ್. ವಸ್ತುಗಳನ್ನು ಸರಬರಾಜು ಮಾಡಲು ಜಿಲ್ಲಾ ಶಸ್ತ್ರಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ ಇವರ ಹೆಸರಿನಲ್ಲಿ ಮೊಹರಾದ ಟೆಂಡರನ್ನು ಎರಡು ಲಕೋಟೆಗಳಲ್ಲಿ (ಟೂ ಕವರ್ ಸಿಸ್ಟಂ) ದಿನಾಂಕ: 27.7.2004 ರಂದು 11 ಗಂಟೆ ಒಳಗೆ ಸಲ್ಲಿಸಲು ಕರೆಯಲಾಗಿದೆ. ಮೊಹರಾದ ಟೆಂಡರುಗಳನ್ನು ಅದೇ ದಿನ 11.30 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮಕ್ಷಮದಲ್ಲಿ ತೆರೆಯಲಾಗುವುದು. ನಿಗದಿತ ಟೆಂಡರ್ ಫಾರಂಗಳಲ್ಲಿ, ಆಹಾರ ಸಾಮಗ್ರಿ, ಪ್ರಥಮ ದರ್ಜೆ ಬ್ರೆಡ್ ಹಾಗೂ ಅವಶ್ಯಕ ವಸ್ತುಗಳಿಗಾಗಿ ಪ್ರತ್ಯೇಕವಾಗಿ 4 ಪ್ರತಿಗಳಲ್ಲಿ ಭರ್ತಿ ಮಾಡಲಾದ ಮೊಹರಾದ ಟೆಂಡರನ್ನು ಕೆಳಕಾಣಿಸಿದಂತೆ ನಿಗದಿತ ದಿನಾಂಕ ಹಾಗೂ ವೇಳೆಯಲ್ಲಿ ಸ್ವೀಕರಿಸಲಾಗುವುದು.

| ಕ್ರಮ ಸಂಖ್ಯೆ | ಸರಬರಾಜು ಮಾಡಬೇಕಾಗುವ ವಸ್ತುಗಳು | ಟೆಂಡರ್ ಸ್ವೀಕರಿಸುವ ದಿನಾಂಕ ಹಾಗೂ ಸಮಯ | ಟೆಂಡರ್ ತೆರೆಯುವ ದಿನಾಂಕ ಹಾಗೂ ಸಮಯ |
|---|---|---|---|
| 1 | ಆಹಾರ ಪದಾರ್ಥಗಳು (ಅಕ್ಕಿ ಮತ್ತು ಸಕ್ಕರೆ ಹೊರತುಪಡಿಸಿ) | 27.7.04 ಬೆಳಿಗ್ಗೆ 11 ಗಂಟೆ | 27.7.04 ಬೆಳಿಗ್ಗೆ 11.30 ಗಂಟೆ |
| 2 | ಪ್ರಥಮ ದರ್ಜೆ ಬ್ರೆಡ್ (ಸಮವಾಗಿ ಹೋಳು ಮಾಡಿದ ಕಾಗದದಲ್ಲಿ ಸುತ್ತಿದ) | 27.7.04 ಬೆಳಿಗ್ಗೆ 11 ಗಂಟೆ | 27.7.04 ಬೆಳಿಗ್ಗೆ 11.30 ಗಂಟೆ |
| 3 | ಆಸ್ಪತ್ರೆ ಅವಶ್ಯಕ ವಸ್ತುಗಳು | 27.7.04 ಬೆಳಿಗ್ಗೆ 11 ಗಂಟೆ | 27.7.04 ಬೆಳಿಗ್ಗೆ 11.30 ಗಂಟೆ |

ಇಚ್ಛೆಯುಳ್ಳ ಟೆಂಡರ್‌ದಾರರು ಪ್ರತಿಯೊಂದು ಐಟಂಗೆ ನಿಗದಿತ ನಮೂನೆ 4 ಪ್ರತಿಗಳಲ್ಲಿ ನಿಗದಿಪಡಿಸಿರುವ ದಿನಾಂಕ ಮತ್ತು ವೇಳೆಗೆ ಟೆಂಡರ್‌ನ್ನು ಸಲ್ಲಿಸತಕ್ಕದ್ದು.

ನಿಗದಿತ ಟೆಂಡರ್ ಫಾರಂಗಳನ್ನು ಕಚೇರಿಯಲ್ಲಿ ಕೆಲಸದ ವೇಳೆಯಲ್ಲಿ ಒಂದು ಪ್ರತಿಗೆ ರೂ. 5.00 ರಂತೆ 4 ಪ್ರತಿಗಳಿಗೆ ರೂ. 20.00 ಗಳನ್ನು ಪಾವತಿಸಿ ದಿನಾಂಕ: 26.7.2004 ರವರೆಗೆ ಈ ಕಛೇರಿಯಲ್ಲಿ ಪಡೆಯಬಹುದು. ಒಂದೊಂದು ಐಟಂಗಳಿಗೂ ಪ್ರತ್ಯೇಕವಾಗಿ ಫಾರಂ ಪಡೆಯತಕ್ಕದ್ದು. ಇದಕ್ಕೆ ಸಂಬಂಧಿಸಿದಂತೆ ಎಲ್ಲಾ ಷರತ್ತುಗಳನ್ನು ಹಾಗೂ ಇನ್ನಿತರೆ ಹೆಚ್ಚಿನ ವಿವರಗಳನ್ನು ಈ ಕಚೇರಿಯಿಂದ ಪಡೆಯಬಹುದು.

**ಟೆಂಡರ್‌ನೊಂದಿಗೆ ಸಲ್ಲಿಸಬೇಕಾದ ದಾಖಲೆಗಳು ಮತ್ತು ನಿಬಂಧನೆಗಳು:-**

1. ಇ.ಎಂ.ಡಿ. ಟೆಂಡರ್ ಮೊತ್ತದ ಶೇ. 5 ರಂತೆ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಜಿಲ್ಲಾ ಶಸ್ತ್ರಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ. ಅಥವಾ ಎಸ್.ಬಿ.ಎಂ. ನಲ್ಲಿ ಹಣ ಪಾವತಿಸಿದ ಮೂಲ ಚಲನನ್ನು ಲಗತ್ತಿಸಬೇಕು.
2. ಟೆಂಡರ್ ಮೊತ್ತದ ಶೇ. 25 ರಷ್ಟು ಸಾಲ್ವೆನ್ಸಿ ಸರ್ಟಿಫಿಕೇಟನ್ನು ರೆವಿನ್ಯೂ ಅಧಿಕಾರಿಗಳಿಂದ ಯೋಗ್ಯ ಪತ್ರವನ್ನು ಪಡೆದಿರಬೇಕು ಅಥವಾ ಸಹಕಾರಿ ಸಂಘಗಳ ರಿಜಿಸ್ಟ್ರಾರ್‌ರವರಿಂದ ಅಥವಾ ಬ್ಯಾಂಕ್‌ನಿಂದ ಉತ್ತಮ ಆರ್ಥಿಕ ಸ್ಥಿತಿಯ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಜಂಟಿ ಸಾಲ್ವೆನ್ಸಿ ಯೋಗ್ಯತಾ ಪತ್ರವನ್ನು ಪರಿಗಣಿಸಲಾಗುವುದಿಲ್ಲ.
3. ಟೆಂಡರ್ ಸಲ್ಲಿಸುವ ಹಿಂದಿನ ನಾಲ್ಕು ವರ್ಷಗಳ ಅವಧಿಯ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಕಟ್ಟಿದ್ದಕ್ಕೆ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

4. ದರ ಮತ್ತು ಬೆಲೆಗಳನ್ನು ಅಂಕಿಯಲ್ಲಿ ಮತ್ತು ಅಕ್ಷರಗಳಲ್ಲಿ ವಿವರವಾಗಿ ಮತ್ತು ಸರಿಯಾಗಿ ನಮೂದಿಸಬೇಕು.
5. ಯಶಸ್ವಿ ಟೆಂಡರ್‌ದಾರರು ಟೆಂಡರ್ ಮೊತ್ತದ ಶೇ. 10 ರಷ್ಟು (ಶೇ. 5 ರಷ್ಟು ಸಹಕಾರ ಸಂಘಗಳಿಗೆ) ನಿಶ್ಚಿತ ಭದ್ರತಾ ಠೇವಣಿ ಸಲ್ಲಿಸತಕ್ಕದ್ದು ಮತ್ತು ರೂ. 100.00 ಬೆಲೆಯ ಸ್ಟಾಂಪ್ಡ್ ಪೇಪರಿನಲ್ಲಿ ಒಪ್ಪಂದ ಪತ್ರವನ್ನು ಸಲ್ಲಿಸತಕ್ಕದ್ದು.
6. ಸೂಚಿಸಿರುವ ಕಾಲ ಮತ್ತು ದಿನಾಂಕವನ್ನು ಮೀರಿ ಬಂದ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
7. ಟೆಂಡರ್ ಅವಧಿಯಲ್ಲಿ ಯಾವುದೇ ಆಹಾರ ಪದಾರ್ಥಗಳ ಮತ್ತು ಬ್ರೆಡ್ಡಿನ ದರಲ್ಲಿ ವ್ಯತ್ಯಾಸವಾದರೆ ಟೆಂಡರ್ ದರವನ್ನು ಬಿಟ್ಟು ವ್ಯತ್ಯಾಸದ ದರವನ್ನು ಹೊಂದಲು ವಿಜೇತರಾದ ಟೆಂಡರುದಾರರು ಅರ್ಹರಾಗಿರುವುದಿಲ್ಲ. ಈ ನಿಬಂಧನೆಯನ್ನು ಸಹ ಒಪ್ಪಂದ ಪತ್ರದಲ್ಲಿ ನಮೂದಿಸಬೇಕು.
8. ಪ್ರತಿ ತಿಂಗಳು ಟೆಂಡರ್‌ದಾರರಿಂದ ಶೇ. 2 ರಂತೆ ಆದಾಯ ತೆರಿಗೆಯನ್ನು ಪ್ರತಿ ತಿಂಗಳ ಬಿಲ್ಲಿನಲ್ಲಿ ಕಟಾವು ಮಾಡಲಾಗುವುದು.
9. ಟೆಂಡರ್ ಫಾರಂನಲ್ಲಿರುವ ಎಲ್ಲಾ ನಿಬಂಧನೆಗಳನ್ನು ಅನುಸರಿಸತಕ್ಕದ್ದು.
10. ಯಾವುದೇ ಕಾರಣ ಕೊಡದೆ ಟೆಂಡರನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಕಾಯ್ದಿರಿಸಲ್ಪಟ್ಟಿದೆ.
11. ಬೇಕರಿ ಲೈಸೆನ್ಸ್ ಚಾಲ್ತಿಯಲ್ಲಿರುವ ಬಗ್ಗೆ ಲೈಸೆನ್ಸ್ ಪ್ರತಿಯನ್ನು ಲಗತ್ತಿಸಿರಬೇಕು.
12. ಮೊಹರಾದ ಟೆಂಡರ್‌ಗಳ ಲಕೋಟೆಯ ಮೇಲೆ ದಪ್ಪ ಅಕ್ಷರಗಳಲ್ಲಿ ಯಾವ ಪೂರೈಕೆಗಾಗಿ ಟೆಂಡರ್ ಸಲ್ಲಿಸಲಾಗಿದೆ ಎಂಬುದನ್ನು ಬರೆಯಬೇಕು.
13. ಮೊದಲನೇ ಕವರಿನಲ್ಲಿ ಇ.ಎಂ.ಡಿ. ಹಾಗೂ ಇತರೆ ದಾಖಲೆಗಳು ಎರಡನೇ ಕವರಿನಲ್ಲಿ ಗುತ್ತಿಗೆದಾರರಿಂದ ಸಹಿ ಮಾಡಲ್ಪಟ್ಟ (ನಾಲ್ಕು ಪ್ರತಿಗಳು) ದರಪಟ್ಟಿಗಳ ನಮೂನೆ.
14. ಆಹಾರ ಪದಾರ್ಥಗಳನ್ನು ಸರಬರಾಜು ಮಾಡುವ ಸಹಕಾರ ಸಂಘಗಳ ಪ್ರಚಲಿತ ಮಾರುಕಟ್ಟೆ ದರಕ್ಕಿಂತ ಹೆಚ್ಚಾಗಿರಕೂಡದು.
15. ಗುತ್ತಿಗೆ ಅವಧಿಯಲ್ಲಿ ಪದಾರ್ಥಗಳನ್ನು ಸರಬರಾಜು ಮಾಡುವ ಬಗ್ಗೆ ಅಥವಾ ಗುಣಮಟ್ಟ ಸರಿಯಾಗಿಲ್ಲದ ಪಕ್ಷದಲ್ಲಿ, ಅತೃಪ್ತಿ ಕಂಡು ಬಂದರೆ ಗುತ್ತಿಗೆ ಅವಧಿಯು ಮುಗಿಯುವ ಮೊದಲೇ ಅಥವಾ ಯಾವಾಗಲಾದರೂ ಒಂದು ತಿಂಗಳು ಮುಂಚಿತವಾಗಿ ಸೂಚನೆ ನೀಡಿ ಗುತ್ತಿಗೆಯನ್ನು ವಜಾ ಮಾಡುವ ಹಕ್ಕನ್ನು ಈ ಕಛೇರಿ ಹೊಂದಿರುತ್ತದೆ.
16. ಗುತ್ತಿಗೆದಾರರು ಮುಂದಿನ ಪ್ರತಿ ತಿಂಗಳು 5ನೇ ತಾರೀಖಿನೊಳಗೆ ಹಿಂದಿನ ತಿಂಗಳ ಬಿಲ್ಲನ್ನು ದೃಢೀಕರಿಸಿ ಪಾವತಿಗಾಗಿ ಸಲ್ಲಿಸತಕ್ಕದ್ದು.
17. ಗುತ್ತಿಗೆದಾರರು ಮುಂದಿನ ಸರ್ಕಾರಿ ಕಾನೂನುಗಳಿಗೆ ಬದ್ಧರಾಗಿರಬೇಕು.
18. ಆಸ್ಪತ್ರೆಗಳಿಗೆ, ಇತರೆ ಸಂಸ್ಥೆಗಳಿಗೆ ಸರಬರಾಜು ಮಾಡಿರುವ ಬಗ್ಗೆ ಅನುಭವ ದೃಢೀಕರಿಸಿದ ಪ್ರಮಾಣ ಪತ್ರ ನೀಡುವುದು ಪ್ರತಿಯನ್ನು ಲಗತ್ತಿಸತಕ್ಕದ್ದು.
19. ಆಸ್ಪತ್ರೆಯ ಅವಶ್ಯಕ ವಸ್ತುಗಳ ಬೆಲೆಗಳು ಎಂ.ಆರ್.ಪಿ. ದರಕ್ಕಿಂತ ಹೆಚ್ಚಾಗಿರಕೂಡದು.
20. ಇ.ಎಂ.ಡಿ. ಹಣವನ್ನು ಪಾವತಿಸಿದಕ್ಕೆ ರಿಯಾಯಿತಿ ಇರುವ ಸಹಕಾರ ಸಂಘ ಸಂಸ್ಥೆಗಳು ಸರ್ಕಾರಿ ಆದೇಶವನ್ನು ಲಗತ್ತಿಸಬೇಕು.
21. ಸಂಬಂಧಪಟ್ಟ ಸರ್ಕಾರಿ ಇಲಾಖೆಗಳಲ್ಲಿ ನೋಂದಣಿ ಮಾಡಿಸಿದ ನೋಂದಣಿ ಪ್ರಮಾಣ ಪತ್ರವನ್ನು ದೃಢೀಕರಿಸಿದ ಪ್ರತಿಯನ್ನು ಲಗತ್ತಿಸಬೇಕು.
22. ವರಮಾನ ತೆರಿಗೆ ಪಾವತಿಸಿರುವ ಪ್ರಮಾಣ ಪತ್ರಗಳು ಅಥವಾ ವಿನಾಯಿತಿ ಇದ್ದರೆ ವಿನಾಯಿತಿ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.
23. ಮಾರಾಟ ತೆರಿಗೆ ಇರುವಂತಹ ಪದಾರ್ಥಗಳಿಗೆ ತೆರಿಗೆ ಸೇರಿ ದರ ನಮೂದಿಸತಕ್ಕದ್ದು.
24. ತಾಜಾ ಬ್ರೆಡ್ಡನ್ನು 400 ಗ್ರಾಂ, 800 ಗ್ರಾಂ ಪ್ಯಾಕೇಟ್‌ಗಳಲ್ಲಿ ಸರಬರಾಜು ಮಾಡತಕ್ಕದ್ದು. ಪ್ರತಿ ಕೆ.ಜಿ. ಯ ದರ ನಮೂದಿಸತಕ್ಕದ್ದು. ಪ್ಯಾಕೇಟ್ ಮೇಲೆ ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ ಎಂದು ನಮೂದಿಸತಕ್ಕದ್ದು.
25. ಕಾನೂನು ವ್ಯಾಪ್ತಿ ಚಿತ್ರದುರ್ಗ ಜಿಲ್ಲೆಗೆ ಒಳಪಟ್ಟಿರುತ್ತದೆ.
26. ಸದರಿ ಗುತ್ತಿಗೆಯನ್ನು ಮುಂದೆ 6 ತಿಂಗಳು ಮೀರದಂತೆ ಅಥವಾ ಮುಂದಿನ ಗುತ್ತಿಗೆಯನ್ನು ನಿಗದಿಪಡಿಸುವವರೆಗೂ ಯಾವುದು ಮೊದಲೋ ಅಲ್ಲಿಯವರೆಗೆ ಸದರಿ ನಿಬಂಧನೆಗಳು ಮತ್ತು ದರಗಳು ಹಾಗೂ ಷರತ್ತುಗಳಿಗೆ ಒಳಪಟ್ಟು ಗುತ್ತಿಗೆದಾರರು ಒಪ್ಪಂದದ ಮೇರೆಗೆ ಗುತ್ತಿಗೆಯ ಮುಂದುವರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.
27. ಮುಷ್ಕರ, ಗಲಭೆ ಹಾಗೂ ಇತ್ಯಾದಿ ಸಮಯಗಳಲ್ಲಿ ತಾವೆ ಪರ್ಯಾಯ ವ್ಯವಸ್ಥೆ ಮಾಡಿ ಆಸ್ಪತ್ರೆಯ ರೋಗಿಗಳಿಗೆ ತೊಂದರೆಯಾಗದಂತೆ ಸರಬರಾಜು ಮಾಡತಕ್ಕದ್ದು.
28. ಬೇಡಿಕೆಗೆ ಅನುಗುಣವಾಗಿ ಆಹಾರ ಪದಾರ್ಥಗಳು ಬ್ರೆಡ್ ಮತ್ತು ಆಸ್ಪತ್ರೆ ಅವಶ್ಯಕ ವಸ್ತುಗಳನ್ನು ಸರಬರಾಜು ಮಾಡತಕ್ಕದ್ದು.
29. ಗುತ್ತಿಗೆ ಪಡೆಯಲು ಅನರ್ಹರಾದ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ದರಗುತ್ತಿಗೆ ನಿಗದಿಪಡಿಸಿದ ನಂತರ ಹಿಂದಿರುಗಿಸಲಾಗುವುದು.
30. ಗುತ್ತಿಗೆದಾರರು ಅವಧಿ ಮುಗಿಯುವವರೆಗೆ ಗುತ್ತಿಗೆಯನ್ನು ಬೇರೆಯವರಿಗೆ ವರ್ಗಾಯಿಸುವಂತಿಲ್ಲ.
31. ಆಹಾರ ಪದಾರ್ಥಗಳಿಗೆ ಪ್ರತಿ ಮಾಹೆ ದರವನ್ನು ನೀಡುವಾಗ ಎ.ಪಿ.ಎಂ.ಸಿ. ಸಂಸ್ಥೆಯ ಅಧಿಕಾರಿಗಳಿಂದ ದೃಢೀಕರಿಸಿರಬೇಕು. ಸದರಿ ವಸ್ತುಗಳಿಗೆ ತಮ್ಮ ಸಂಸ್ಥೆಯಿಂದ ಶೇಕಡ ಎಷ್ಟು ರಿಯಾಯಿತಿ ನೀಡಲಾಗುವುದು ಎಂಬುದನ್ನು ನಮೂದಿಸತಕ್ಕದ್ದು.
32. ಎಲ್ಲಾ ನಿಬಂಧನೆಗಳನ್ನು ಟೆಂಡರ್ ಫಾರಂನಲ್ಲಿ ನಮೂದಿಸಲಾಗಿದೆ.

**ಜಿಲ್ಲಾ ಆಸ್ಪತ್ರೆ ಚಿತ್ರದುರ್ಗ**

ಮೊದಲನೆ ಲಕೋಟೆಯಲ್ಲಿ ಈ ಕೆಳಕಂಡ ದೃಢೀಕರಿಸಿದ ದಾಖಲೆಗಳನ್ನು ದ್ವಿ ಪ್ರತಿಯಲ್ಲಿ ಸಲ್ಲಿಸತಕ್ಕದ್ದು.

(ಮೊದಲನೇ ಲಕೋಟೆಯಲ್ಲಿ ದಾಖಲೆಗಳೊಂದಿಗೆ ಹಾಗೂ ಮಾಹಿತಿಯು ಸರಿಯಾಗಿದ್ದರೆ ಮಾತ್ರ ಪೂರ್ಣ ದರ ಸಲ್ಲಿಸಿರುವ ಎರಡನೇ ಲಕೋಟೆಯನ್ನು ತೆರೆಯಲಾಗುವುದು)

**ಮೊದಲನೇ ಕವರಿನಲ್ಲಿ ಇಡಬೇಕಾದ ದಾಖಲೆಗಳು:-**

1. ನೊಂದಾಯಿತ ಸಹಕಾರ ಸಂಘಗಳು : ಸರ್ಕಾರಿ ಸಹಕಾರ ಸಂಘ ಸಂಸ್ಥೆಗಳ ಹೆಸರು : ವಿಳಾಸ.
2. ಅಗತ್ಯ ಸಂದರ್ಭದಲ್ಲಿ ಚಿತ್ರದುರ್ಗದಲ್ಲಿ ಸಂಪರ್ಕಿಸಲು ಸಂಸ್ಥೆಯ ಮುಖ್ಯ ವ್ಯಕ್ತಿಯ ಹೆಸರು, ಹುದ್ದೆ ವಿಳಾಸ ಮತ್ತು ದೂರವಾಣಿ ಸಂಖ್ಯೆ.
3. ಕೋ-ಆಪರೇಟಿವ್ ಸೊಸೈಟಿ ಕಾಯ್ದೆ ಅನ್ವಯ ನೋಂದಣಿ ಪ್ರಮಾಣ ಪತ್ರ (ನೋಂದಣಿಕರಿಸಿದ ದಿನಾಂಕ ಟೆಂಡರು ಪ್ರಕಟಣೆ ದಿನಾಂಕ ಟೆಂಡರು ಪ್ರಕಟಣೆ ದಿನಾಂಕದಿಂದ 5 ವರ್ಷ ಅಥವಾ ಅದಕ್ಕಿಂತಲೂ ಮೇಲ್ಪಟ್ಟಿರಬೇಕು).
4. 4 ವರ್ಷಗಳ ಆದಾಯ ತೆರಿಗೆ ಪಾವತಿ ಪತ್ರ (ಸಂಸ್ಥೆ ಹೆಸರಿನಲ್ಲಿ ಪಾವತಿಸಿರುವ ಪತ್ರ ಸಲ್ಲಿಸತಕ್ಕದ್ದು).
5. ಟೆಂಡರ್ ಮೊತ್ತಕ್ಕೆ ಶೇ. 25 ರಂತೆ ಬ್ಯಾಂಕಿನಿಂದ ಪಡೆದ (ಸಾಲ್ವೆನ್ಸಿ) ಪ್ರಮಾಣ ಪತ್ರ.
6. ಹಿಂದಿನ ನಾಲ್ಕು ವರ್ಷಗಳ ಮಾರಾಟ ತೆರಿಗೆ ಪಾವತಿ ಪ್ರಮಾಣ ಪತ್ರ ಹಾಗೂ ನೋಂದಣಿ ಮಾಡಿರುವ ಪ್ರಮಾಣ ಪತ್ರವನ್ನು ಲಗತ್ತಿಸುವುದು.
7. ಇ.ಎಂ.ಡಿ. ಟೆಂಡರ್ ಮೊತ್ತಕ್ಕೆ ಶೇ. 5 ರಂತೆ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಜಿಲ್ಲಾ ಶಸ್ತ್ರ ಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದ ಡಿ.ಡಿ ಅಥವಾ ಎಸ್.ಬಿ.ಎಂ. ನಲ್ಲಿ ಹಣ ಪಾವತಿಸಿದ ಮೂಲ ಚಲನ್ ಲಗತ್ತಿಸತಕ್ಕದ್ದು.
8. ಸಹಕಾರ ಸಂಘಗಳ ಇಲಾಖೆಯವರಿಂದ ಹಿಂದಿನ ಮೂರು ವರ್ಷಗಳ ದೃಢೀಕರಿಸಿದ ಲೆಕ್ಕ ಪರಿಶೋಧನಾ ವರದಿ ಅಥವಾ ಆಡಿಟರ್ ಲೆಕ್ಕ ಪರಿಶೋಧನಾ ವರದಿ.
9. ಚಾಲ್ತಿ ಬೇಕರಿ ಲೈಸೆನ್ಸ್ ಸಂಬಂಧಪಟ್ಟ ಪ್ರಾಧಿಕಾರದಿಂದ
10. ಆಸ್ಪತ್ರೆಗಳಿಗೆ ಇತರೆ ಸಂಸ್ಥೆಗಳಿಗೆ ಸರಬರಾಜು ಮಾಡಿರುವ ಬಗ್ಗೆ ಅನುಭವ ದೃಢೀಕರಿಸಿದ ಪ್ರಮಾಣ ಪತ್ರ ನೀಡುವುದು. ಪ್ರತಿಯನ್ನು ಲಗತ್ತಿಸತಕ್ಕದ್ದು.
11. ಎರಡನೆ ಲಕೋಟೆಯಲ್ಲಿ ಗುತ್ತಿಗೆದಾರರಿಂದ ಸಹಿ ಮಾಡಲ್ಪಟ್ಟ ದರಪಟ್ಟಿಗಳ 4 ಪ್ರತಿಗಳನ್ನು ಇಡತಕ್ಕದ್ದು.

ಪಿ.ಡಿ. 64 ಜಿಲ್ಲಾ ಶಸ್ತ್ರ ಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ.

**ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ**

**ನಂ. 14:3ಎ ರಾಷ್ಟ್ರೋತ್ಥಾನ ಪರಿಷತ್ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು-560 001**

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಕೈಜಇ:ಆಡಳಿತ:ಸಿ2:ವಸ್ತುವಿಲೇವಾರಿ:2004-05, ದಿನಾಂಕ: 19ನೇ ಜೂನ್ 2004**

**ವಿಷಯ:** ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಕಚೇರಿಯಲ್ಲಿಯ ಅನುಪಯುಕ್ತ ವಸ್ತುಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ನಂ. 14:3ಎ ರಾಷ್ಟ್ರೋತ್ಥಾನ ಪರಿಷತ್ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು-560 001. ಕಚೇರಿಗೆ ಸೇರಿದ ಈ ಕೆಳಕಂಡ ಅನುಪಯುಕ್ತ ವಸ್ತುಗಳನ್ನು ಹೇಗಿದೆಯೋ ಹಾಗೇ ಯಥಾ ಸ್ಥಿತಿಯಲ್ಲಿ ದಿನಾಂಕ: 17.7.2004 ರಂದು ಬೆಳಿಗ್ಗೆ 11.00 ಗಂಟೆಗೆ ಮೇಲೆ ತಿಳಿಸಿದ ಕಚೇರಿಯ ಕಟ್ಟಡದ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಸವಾಲು ಮಾಡಬೇಕೆಂದು ಕೋರಲಾಗಿದೆ. ಹಾಗೂ ಅನುಪಯುಕ್ತ ವಸ್ತುಗಳ ಪಟ್ಟಿಯನ್ನು 1 ರಿಂದ 9 ರವರೆಗೆ ತಿಳಿಸಲಾಗಿದೆ.

**ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತಾರೆ.**

**ನಿಬಂಧನೆಗಳು ಮತ್ತು ಷರತ್ತುಗಳು**

1. ವಸ್ತುಗಳನ್ನು ಎಲ್ಲಿ ಹೇಗಿದೆಯೋ ಹಾಗೆ ಎಂಬ ನಿಬಂಧನೆ ಮೇರೆಗೆ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.
2. ವಸ್ತುಗಳನ್ನು ಗುಂಪು ಗುಂಪಾಗಿ ವಿಂಗಡಿಸಿ ಹರಾಜು ಹಾಕಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮುಂಚೆ ರೂ. 200 ನಗದು ಠೇವಣಿಯನ್ನು ನೀಡಿ ಹರಾಜಿನಲ್ಲಿ ಭಾಗವಹಿಸುವ ಅಧಿಕಾರಿಗಳಿಗೆ ಸಲ್ಲಿಸಿ ಹರಾಜಿನಲ್ಲಿ ಭಾಗವಹಿಸತಕ್ಕದ್ದು. ಠೇವಣಿ ನೀಡದೇ ಇರುವವರಿಗೆ ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
4. ಜಯಶೀಲರಾದ ಬಿಡ್ಡುದಾರರು ಬಿಡ್ ಮಾಡಿದ ಮೊಬಲಗನ್ನು ಸ್ಥಳದಲ್ಲಿಯೇ ಪಾವತಿಸಿ ವಸ್ತುಗಳನ್ನು ತಮ್ಮ ಸ್ವಂತ ಖರ್ಚಿನಿಂದ ಅದೇ ದಿನ ಸಾಗಿಸಿಕೊಳ್ಳಬೇಕು. ಬಿಡ್‌ದಾರರು ಬಿಡ್‌ನ ಹಣವನ್ನು ಸ್ಥಳದಲ್ಲಿಯೇ ಪಾವತಿಸಬೇಕು. ತಪ್ಪಿದಲ್ಲಿ ಅಂತಹವರು ನೀಡಿರುವ ಠೇವಣಿ ಹಣವನ್ನು ಯಾವ ಮುನ್ಸೂಚನೆಯನ್ನು ನೀಡದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5. ಹರಾಜಿನಲ್ಲಿ ಜಯಶೀಲರಾಗದ ಬಿಡ್‌ದಾರರ ಠೇವಣಿ ಹಣವನ್ನು ಹರಾಜು ಪ್ರಕ್ರಿಯೆ ಮುಗಿದ ನಂತರ ಮರುಪಾವತಿ ಮಾಡಲಾಗುವುದು.
6. ಚಾಲ್ತಿಯಲ್ಲಿರುವ ಮಾರಾಟ ತೆರಿಗೆ ಹಾಗೂ ಇನ್ನಿತರೆ ತೆರಿಗೆಗಳನ್ನು ನಿಯಮಾನುಸಾರ ಪ್ರತ್ಯೇಕವಾಗಿ ಪಾವತಿಮಾಡತಕ್ಕದ್ದು.
7. ಹರಾಜು ಪ್ರಕ್ರಿಯೆಯಲ್ಲಿ ಯಾವುದೇ ವಿವಾದ ಉಂಟಾದ ಪಕ್ಷದಲ್ಲಿ ಹರಾಜನ್ನು ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ಹರಾಜನ್ನು ಮಾಡದ ಎಲ್ಲಾ ಹಕ್ಕುಗಳನ್ನು ಹರಾಜು ನಡೆಸುವ ಅಧಿಕಾರಿಗಳು ಹೊಂದಿರುತ್ತಾರೆ.

8. ಎಲ್ಲಾ ವಿಷಯಗಳಲ್ಲಿ ಹರಾಜು ನಡೆಸುವ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ ಮತ್ತು ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಅವರ ತೀರ್ಮಾನಕ್ಕೆ ಬದ್ಧರಾಗಿರುತ್ತಾರೆ.
9. ವಸ್ತುಗಳ ಅಂದಾಜು ಮೌಲ್ಯಕ್ಕಿಂತ ಕಡಿಮೆ ಬರುವ ಮೌಲ್ಯವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹರಾಜು ನಡೆಸುವ ಅಧಿಕಾರಿ ಹೊಂದಿರುತ್ತಾರೆ.

**ವಸ್ತುಗಳ ವಿವರ**

| ಕ್ರಮ ಸಂಖ್ಯೆ | ಸರಕುಗಳ ವಿವರ | ಸಂಖ್ಯೆ | ವಸ್ತುವಿನ ಸ್ಥಿತಿ |
|---|---|---|---|
| 1 | ಉದ್ದನೆಯ ಕುರ್ಚಿ ಉದ್ದ 6 ಅಗಲ 1 ಅಡಿ | 4 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 2 | ರಿವಾಲ್‌ವಿಂಗ್ ಚೇರ್‌ಗಳು | 5 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 3 | ಎಸ್. ಟೈಪ್ ಚೇರ್‌ಗಳು | 10 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 4 | ಬೋರ್ಡ್‌ಗಳು | 2 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 5 | ವುಡನ್ ಚೇರ್‌ಗಳು | 3 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 6 | ವುಡ್ ಸ್ಕ್ರೀನ್ ಉದ್ದ 6 ಅಗಲ 6 ಅಡಿ | 1 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 7 | ಅಲ್ಮೇರಾ ಉದ್ದ 6 ಅಡಿ | 1 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 8 | ಡ್ಯೂಪ್ಲಿಕೇಟಿಂಗ್ ಮೆಷಿನ್ | 1 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |
| 9 | ಟ್ರೇಗಳು | 7 | ಹಳೆಯದಾಗಿದ್ದು ಚೆನ್ನಾಗಿರುವುದಿಲ್ಲ |

ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ
ಪಿ.ಆರ್. 308 ನಿರ್ದೇಶಕರು, ಕೈಮಗ್ಗ ಮತ್ತು ಜವಳಿ.

**ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ**

**ನಂ. 14:3ಎ, ರಾಷ್ಟ್ರೋತ್ಥಾನ ಪರಿಷತ್ ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು-560 001**

**ಟೆಂಡರ್ ಮತ್ತು ಬಹಿರಂಗ ಹರಾಜು**

**ಸಂಖ್ಯೆ: ಕೈಜಇ:ಆಡಳಿತ:ಸಿ2:ವಾವಿ:2004-05, ದಿನಾಂಕ: 17ನೇ ಜೂನ್ 2004**

ಈ ಕಚೇರಿಯ ಹಳೆಯ ವಾಹನ ಪೆಟ್ರೋಲ್ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಜಿ.1855ನ್ನು ಟೆಂಡರ್ ಹಾಗೂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ವಾಹನದ ವಿವರ ಈ ಕೆಳಕಂಡಂತಿರುತ್ತದೆ.

**ವಾಹನ ವಿವರಗಳು**

| ಕ್ರ.ಸಂಖ್ಯೆ | ವಾಹನ ಸಂಖ್ಯೆ | ಮಾದರಿ | ತಯಾರಿಕೆಯ ವರ್ಷ |
|---|---|---|---|
| 1 | ಸಿ.ಎ.ಜಿ. 1855 | ಅಂಬಾಸಿಡರ್ ಕಾರ್ (ಪೆಟ್ರೋಲ್) | 1985 |

**ಟೆಂಡರ್ ಮತ್ತು ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಭಾಗವಹಿಸತಕ್ಕದ್ದು.**

1. ಆಸಕ್ತಿಯುಳ್ಳ ವ್ಯಕ್ತಿಗಳು ಮೇಲೆ ತಿಳಿಸಿದ ವಾಹನ ಅಂಬಾಸಿಡರ್ ಸಂಬಂಧವಾಗಿ ಮೊಹರಾದ ಲಕೋಟೆಗಳಲ್ಲಿ ತಮ್ಮ ಟೆಂಡರ್‌ಗಳನ್ನು ಮಾತ್ರ (ಡಿ.ಡಿ. ಹೊರತುಪಡಿಸಿ) ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ ಇವರಿಗೆ ದಿನಾಂಕ: 19.7.2004 ರಂದು ಬೆಳಿಗ್ಗೆ 11.30 ಗಂಟೆಗೆ ಅಥವಾ ಅದಕ್ಕೂ ಮುಂಚೆ ತಲುಪುವಂತೆ ಸಲ್ಲಿಸಬೇಕು.
2. ಹರಾಜು ಮಾರಾಟವು ದಿನಾಂಕ: 19.7.2004 ರಂದು ಮಧ್ಯಾಹ್ನ 12.30 ಗಂಟೆಗೆ ಮೇಲೆ ತಿಳಿಸಿದ ಕಚೇರಿ ಆವರಣದಲ್ಲಿ ಪ್ರಾರಂಭವಾಗುವುದು. ಆಸಕ್ತಿಯುಳ್ಳ ಸವಾಲುಗಾರರು ಸಾರ್ವತ್ರಿಕ ರಜೆಯನ್ನು ಹೊರತುಪಡಿಸಿ ಬೆಳಿಗ್ಗೆ 11.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ ವಾಹನವನ್ನು ಈ ಕಚೇರಿಯ ಆವರಣದಲ್ಲಿ ಪರೀಕ್ಷಿಸಬಹುದು. ಮೇಲೆ ತಿಳಿಸಿದ ವಾಹನದ ಬಗ್ಗೆ ಯಾವುದೇ ಖಾತರಿಯನ್ನು ನೀಡಲಾಗುವುದಿಲ್ಲ. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ವಿಲೇವಾರಿ ಮಾಡಲಾಗುವುದು ಮತ್ತು ಹಾಗೆಯೇ ತೆಗೆದುಕೊಂಡು ಹೋಗಬೇಕು. ಈ ಸಂಬಂಧವಾಗಿ ಯಾವುದೇ ಪತ್ರವ್ಯವಹಾರಗಳನ್ನು ಪುರಸ್ಕರಿಸುವುದಿಲ್ಲ.
3. ಟೆಂಡರ್‌ನ್ನು ಮೊಹರಾದ ಲಕೋಟೆಯ ಮೇಲೆ ಹಳೆಯ ಸಿ.ಎ.ಜಿ-1855 ಅಂಬಾಸಿಡರ್ ಪೆಟ್ರೋಲ್ ಕಾರ್ ವಿಲೇವಾರಿಗೆ ಟೆಂಡರ್ ಎಂದು ಮೇಲ್ಬರಹ ಬರೆದು ಸಲ್ಲಿಸಬೇಕು.
4. ಟೆಂಡರಿನ ಮುಂಗಡ ಹಣವನ್ನು ಠೇವಣಿಯಾಗಿ (E.M.D) ಕಾರಿಗೆ ರೂ. 3,000.00 (ರೂಪಾಯಿ ಮೂರು ಸಾವಿರಗಳನ್ನು ಮಾತ್ರ) ಪ್ರತ್ಯೇಕವಾಗಿ ಡಿ.ಡಿ. ಅಥವಾ ಪೇ ಆರ್ಡರ್ ಮುಖಾಂತರ ಮೇಲೆ ತಿಳಿಸಿದ ಆಯುಕ್ತರ ಹೆಸರಿನಲ್ಲಿ ಸಲ್ಲಿಸಬೇಕು (ಟೆಂಡರ್ ಲಕೋಟೆಯಲ್ಲಿ ಡಿ.ಡಿ. ಯನ್ನು ಇರಿಸಕೂಡದು) ಮತ್ತು ಡಿ.ಡಿ. ನೀಡಿದಕ್ಕೆ ಸ್ವೀಕೃತಿ ರಸೀದಿಯನ್ನು ಪಡೆಯತಕ್ಕದ್ದು. ಈ ಮುಂಗಡ ಠೇವಣಿಗೆ ಯಾವುದೇ ಬಡ್ಡಿ ನೀಡಲಾಗುವುದಿಲ್ಲ.
5. ಠೇವಣಿ ಹಣವನ್ನು (ಡಿ.ಡಿ) ಅತೀ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರೆಂದು, ಪರಿಗಣಿಸಿ ಉಳಿದವರಿಗೆ ಠೇವಣಿ ಹಣವನ್ನು (ಡಿ.ಡಿ) ಯನ್ನು ಹರಾಜು ಮುಗಿದ ನಂತರ ಸ್ಥಳದಲ್ಲಿಯೇ ಹಿಂತಿರುಗಿಸಲಾಗುವುದು.
6. ಮುಂಗಡ ಹಣ ಠೇವಣಿ (ಡಿ.ಡಿ) ಹೊಂದಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7. ಟೆಂಡರ್ ಯಾವುದೇ ಷರತ್ತನ್ನು ಹೊಂದಿರತಕ್ಕದ್ದಲ್ಲ ಮತ್ತು ಷರತ್ತು ಹೊಂದಿದ್ದರೆ ಅವುಗಳನ್ನು ತಿರಸ್ಕರಿಸಲಾಗುವುದು.
8. ಅತೀ ಹೆಚ್ಚಿನ ಬಹಿರಂಗ : ಟೆಂಡರ್‌ದಾರರು ಸ್ಥಳದಲ್ಲಿಯೇ ಹರಾಜಿನ ಪೂರ್ತಿ ಹಣವನ್ನು ನಗದಾಗಿ ಪಾವತಿಸತಕ್ಕದ್ದು.

9. ಮೊದಲನೇ ಅತೀ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರು ಪೂರ್ಣ ಹಣ ಪಾವತಿಸಿದ ನಂತರವೇ ಎರಡನೆ ಅತೀ ಹೆಚ್ಚಿನ ಅಂತಿಮ ಬಹಿರಂಗ ಹರಾಜು : ಕಂ ಟೆಂಡರ್‌ದಾರರ ಹಣವನ್ನು ವಾಪಸ್ಸು ಮಾಡಲಾಗುವುದು.
   ಒಂದು ವೇಳೆ ಮೊದಲನೆ ಅತೀ ಹೆಚ್ಚಿನ ಅಂತಿಮ ಬಹಿರಂಗ ಹರಾಜು ಕಂ ಟೆಂಡರ್‌ದಾರರು ಪೂರ್ತಿ ಹಣ ಪಾವತಿಸದೆ ಇದ್ದಲ್ಲಿ ಅದೇ ದಿನ ಎರಡನೆ ಬಿಡ್ಡುದಾರರು ಆರ್.ಟಿ.ಓ. ರವರು ನಿಗದಿಪಡಿಸಿದ ಹಣಕ್ಕಿಂತ ಹೆಚ್ಚಿಗೆ ಬಹಿರಂಗ ಹರಾಜು : ಕಂ ಟೆಂಡರ್ ಇದ್ದಲ್ಲಿ ನೀಡಲಾಗುವುದು.
10. ಹರಾಜು ಕಂ ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹರಾಜು ಕಂ ಟೆಂಡರ್ ಪ್ರಕ್ರಿಯೆ ನಡೆಸುವ ಪ್ರಾಧಿಕಾರಕ್ಕೆ ಸೇರುತ್ತದೆ.
11. ಹರಾಜು ಕಂ ಟೆಂಡರ್ ಪ್ರಾರಂಭವಾಗುವ ಸಮಯಕ್ಕೆ ಸರಿಯಾಗಿ ಎಲ್ಲಾ ಬಿಡ್ಡುದಾರರು ಭಾಗವಹಿಸತಕ್ಕದ್ದು. ಕಂಡಿಕೆ (2) ರಲ್ಲಿ ತಿಳಿಸಿರುವಂತೆ ಹರಾಜು ಪ್ರಕ್ರಿಯೆ ಮುಗಿದ ನಂತರ ಬಂದ ಸವಾಲುದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
12. ಯಶಸ್ವಿ ಟೆಂಡರ್‌ದಾರ : ಸವಾಲುಗಾರನು ಸವಾಲಿನ ಬೆಲೆಯನ್ನು ಅದೇ ದಿನ ನಗದು ಅಥವಾ ಡಿ.ಡಿ. ಅಥವಾ ಪೇ ಆರ್ಡರ್ ಮೂಲಕ ಪಾವತಿಸತಕ್ಕದ್ದು. ತಪ್ಪಿದಲ್ಲಿ ಠೇವಣಿಯಾಗಿಟ್ಟ ಮುಂಗಡ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ. ಮಾರಾಟವಾಗಿರುವ ಅಂದರೆ ಸಂದಾಯಮಾಡಿ ತೆಗೆದುಕೊಂಡು ಹೋಗದ ಕಾರು ಕೈಮಗ್ಗ ಮತ್ತು ಜವಳೀ ಇಲಾಖೆಯ ಆಸ್ತಿಯಾಗುತ್ತದೆ. ಮತ್ತು ಈ ಇಲಾಖೆಯು ಅಂತಹ ಕಾರನ್ನು ಸೂಕ್ತವೆಂದು ಭಾವಿಸುವ ಯಾವುದೇ ವಿಧಾನದಲ್ಲಿ ಯಾವುದೇ ಪೂರ್ವ ನೋಟಿಸು ನೀಡದೇ ಮಾರಾಟ ಮಾಡುವ ಹಕ್ಕನ್ನು ಹೊಂದಿರುತ್ತದೆ.
13. ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು ರವರು ಮಾರಾಟವನ್ನು ಖಚಿತಪಡಿಸಿದ ನಂತರ ಮಾರಾಟವು ಪೂರ್ಣಗೊಳ್ಳುತ್ತದೆ.
14. ಕರ್ನಾಟಕ ಮಾರಾಟ ತೆರಿಗೆ : ಕೇಂದ್ರ ಮಾರಾಟ ತೆರಿಗೆ (ಸಂದರ್ಭಾನುಸಾರ) ಪ್ರಚಲಿತ ದರದಂತೆ ಅನ್ವಯವಾಗುವಂತೆ ಅದೇ ದಿನ ಪಾವತಿಸಬೇಕು. ಟೆಂಡರ್ ಕಂ ಹರಾಜು ಹಣ ಮತ್ತು ಇದಕ್ಕೆ ಅನ್ವಯವಾಗುವ ತೆರಿಗೆಗಳು ಪ್ರತ್ಯೇಕವಾಗಿರುತ್ತದೆ.
15. ಸಂದಾಯ : ವಶಾವಣೆ : ಎಲ್ಲಾ ತೆರಿಗೆ : ಕೇಂದ್ರ ಮಾರಾಟ ತೆರಿಗೆಗಳು ಮತ್ತು ಸುಂಕಗಳು ಪ್ರತ್ಯೇಕವಾಗಿರತಕ್ಕದ್ದು, ವಾಹನಗಳ ಹಣ ಸಂದಾಯದ ವಶಾವಣೆ ಪಡೆಯುವ ಸಂದರ್ಭದಲ್ಲಿ ಅನ್ವಯವಾಗುವ ತೆರಿಗೆಗಳ ಜೊತೆಗೆ ಟೆಂಡರ್ ಕಂ ಹರಾಜು ಹಣವನ್ನು ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಬೆಂಗಳೂರು ಇವರಿಗೆ ಸಂದಾಯ ಮಾಡತಕ್ಕದ್ದು. ತೆರಿಗೆಗಳ ಜೊತೆಗೆ ಟೆಂಡರ್ ಹಾಗೂ ಮಾರಾಟದಿಂದ ಬಂದ ಹಣವನ್ನು ಸಂದಾಯ ಮಾಡಿ ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಬೆಂಗಳೂರು ಇವರಿಂದ ಪಡೆದ ವಶಾವಣೆ ಆದೇಶವನ್ನು ಪಡೆದ ನಂತರವೇ ವಾಹನವನ್ನು ತೆಗೆದುಕೊಂಡು ಹೋಗಲು ಅನುಮತಿಸಲಾಗುವುದು.
16. ಕೊಂಡುಕೊಂಡ ವ್ಯಕ್ತಿಯು ತನ್ನ ಪ್ರತಿನಿಧಿಯ ಮೂಲಕ ಕಾರಿನ ವರ್ಗಾವಣೆ ಪಡೆದುಕೊಳ್ಳಲು ಇಚ್ಛಿಸಿದಲ್ಲಿ ಅಧಿಕೃತ ಪತ್ರದ ಮೂಲಕ ಸ್ಪಷ್ಟವಾಗಿ ಪ್ರತಿನಿಧಿಯ ಹೆಸರನ್ನು ಸೂಚಿಸಿ, ಯಥೋಚಿತವಾಗಿ ಪ್ರತಿನಿಧಿಯ ಮಾದರಿಯ ಸಹಿಯನ್ನು ದೃಢೀಕರಿಸತಕ್ಕದ್ದು, ಈ ಇಲಾಖೆಯು ಪ್ರತಿನಿಧಿಯ ಗುರುತಿನ ಬಗ್ಗೆ ಮತ್ತು ಯಾವುದೇ ತಪ್ಪು ವರ್ಗಾವಣೆ ಆದ ಬಗ್ಗೆ ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ.
17. ವಾಹನವನ್ನು ಇದ್ದಲ್ಲಿ ಇದ್ದಂತೆಯೇ ಆಧಾರದ ಮೇಲೆ ಮಾರಾಟ ಮಾಡುವುದರಿಂದ ಕೊಳ್ಳುವವರು ತಮ್ಮೊಂದಿಗೆ ವರ್ಗಾವಣೆ ಆದೇಶದ ಪ್ರತಿಗಳು ಮಾರಾಟ ತೆರಿಗೆಯ ಫಾರಂ ಇತರೇ ಯಾವುದೇ ಚಲನ್‌ಗಳನ್ನು ವ್ಯವಸ್ಥೆ ಮಾಡಿಕೊಳ್ಳುವ ಜವಾಬ್ದಾರಿ ಕೊಳ್ಳುವವರೇ ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.
18. ಟೆಂಡರ್ ಕಂ ಹರಾಜು ಪ್ರಕ್ರಿಯೆ ಮುಗಿದ ನಂತರ (ಕಂಡಿಕೆ 13 ರಲ್ಲಿ ತಿಳಿಸಿರುವಂತೆ) ಆರ್.ಸಿ. ಪುಸ್ತಕ ಮತ್ತು ತೆರಿಗೆ ವಿನಾಯಿತಿ ಪತ್ರಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋರಮಂಗಲ, ಬೆಂಗಳೂರು ಕೇಂದ್ರ, ಬೆಂಗಳೂರು ರವರಿಗೆ ವಾಹನ ವರ್ಗಾವಣೆಗಾಗಿ ಕಳುಹಿಸಲಾಗುವುದು.
19. ಹರಾಜು ಕಂ ಟೆಂಡರ್‌ನಲ್ಲಿ ಭಾಗವಹಿಸುವವರು ಈ ಎಲ್ಲಾ ನಿಯಮದ ಷರತ್ತುಗಳನ್ನು ಒಪ್ಪಿಕೊಳ್ಳಲು ಬದ್ದರಿದ್ದೇವೆಂದು ಈ ಕಚೇರಿಯ ಹರಾಜು ಕಂ ಟೆಂಡರ್ ಪುಸ್ತಕದಲ್ಲಿ ಸಹಿ ಮಾಡತಕ್ಕದ್ದು.
20. ಈ ಹರಾಜು ಕಂ ಟೆಂಡರ್ ಈ ಕಚೇರಿಯ ಪ್ರಾಧಿಕಾರಕ್ಕೆ ಒಳಪಟ್ಟಿರುತ್ತದೆ. ಮತ್ತು ಇದರ ಕುರಿತು ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿರುವುದಿಲ್ಲ.
21. ಹರಾಜಿನಲ್ಲಿ ಬಿಡ್ ಮಾಡಿದ ವಾಹನವನ್ನು ಮೇಲಾಧಿಕಾರಿಗಳಿಂದ ಅನುಮೋದನೆ ಪಡೆದನಂತರ ತಮಗೆ ತಿಳಿಸಿದ ದಿನಾಂಕದೊಳಗೆ ಈ ಕಚೇರಿಯ ಆವರಣದಿಂದ ತೆಗೆದುಕೊಂಡು ಹೋಗತಕ್ಕದ್ದು.

ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ
ನಿರ್ದೇಶಕರು, ಕೈಮಗ್ಗ ಮತ್ತು ಜವಳಿ.

ಪಿ.ಆರ್. 309

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರುರವರ ಕಛೇರಿಯ ಪ್ರಕಟಣೆ**

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಎ5-ಮಾರಾಟ-ಸಿಆರ್-30/2004-05, ದಿನಾಂಕ: 30ನೇ ಜೂನ್ 2004**

**ವಿಷಯ:** ದೊಡ್ಡಬಳ್ಳಾಪುರ ಅರಣ್ಯ ವಲಯದಲ್ಲಿ ನಾಗರಕೆರೆ ಅಂಗಳದ ನೆಡುತೋಪಿನಲ್ಲಿ ಕರಿಜಾಲಿ ಮರಗಳನ್ನು ಕಡಿದು ಸ್ಥಳದಲ್ಲೆ ಲಾಟ್ ಮಾಡಿರುವ ನಾಟ ಮತ್ತು ಉರುವಲು ಸೌದೆಯ ಬಹಿರಂಗ ಹರಾಜು ಕುರಿತು.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಬೆಂಗಳೂರು ಗ್ರಾಮಾಂತರ ಅರಣ್ಯ ವಿಭಾಗದ ದೊಡ್ಡಬಳ್ಳಾಪುರ ಅರಣ್ಯ ವಲಯದ ನಾಗರಕೆರೆ ಅಂಗಳ ನೆಡುತೋಪಿನಲ್ಲಿ ಕತ್ರಾವಣೆ ಮಾಡಿ ಸ್ಥಳದಲ್ಲೆ ಲಾಟ್ ಮಾಡಿರುವ ಈ ಕೆಳಕಂಡ ಕರಿ ಜಾಲಿ ನಾಟ ಮತ್ತು ಉರುವಲು ಸೌದೆಯನ್ನು ಬಹಿರಂಗ ಹರಾಜು ಮೂಲಕ ದಿನಾಂಕ: 20.7.2004 ರಂದು ಬೆಳಿಗ್ಗೆ 11.30 ಗಂಟೆಗೆ ನಾಗರಕೆರೆ ಕೆರೆ ಅಂಗಳದ ಆವರಣದಲ್ಲಿ ಕೆಳಸಹಿದಾರರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕೃತ ಅಧಿಕಾರಿಯು ಕೆಳಕಂಡ ಷರತ್ತುಗಳ ಮೇಲೆ ಬಹಿರಂಗ ಹರಾಜನ್ನು ಮಾಡಲು ಉದ್ದೇಶಿಸಲಾಗಿದೆ.

**ಷೆಡ್ಯೂಲ್**

| ಕ್ರ.ಸಂ. | ವಿವರಗಳು (ಕರಿಜಾಲಿ ನಾಟ / ಉರುವಲು ಸೌದೆ) | ಅಂದಾಜು ಪ್ರಮಾಣ | ಮಾರಾಟದ ದಿನಾಂಕ | ಇ.ಎಂ.ಡಿ (ಪ್ರತಿ ಲಾಟಿಗೆ) |
|---|---|---|---|---|
| 1 | 1134 ತುಂಡುಗಳು (ನಾಟ) | 121.285 Cmtr. | 20.7.2004 | 5,000.00 |
| 2 | 27 ಲಾಟುಗಳು (ಉರುವಲು ಸೌದೆ) | 829.50 Cmtr. | | |

**ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು 5,000.00 ರೂ.ಗಳ ಇ.ಎಂ.ಡಿ ಠೇವಣಿ ಇಡಬೇಕಾಗುತ್ತದೆ.
2. ಷೆಡ್ಯೂಲ್‌ನಲ್ಲಿ ಸೂಚಿಸಿರುವ ನಿಗದಿತ ಸಮಯ ಮತ್ತು ದಿನಾಂಕದಂದು ಬಹಿರಂಗ ಹರಾಜನ್ನು ನಡೆಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವ ಮೊದಲು ಷೆಡ್ಯೂಲಿನಲ್ಲಿ ನಮೂದಿಸಿರುವ ಇಡುಗಂಟನ್ನು (ಇ.ಎಂ.ಡಿ) ನಗದು ರೂಪದಲ್ಲಿ ಪಾವತಿಸತಕ್ಕದ್ದು.
4. ಇಡುಗಂಟನ್ನು ಜಮಾ ಮಾಡದೇ ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
5. ಷೆಡ್ಯೂಲ್‌ನಲ್ಲಿ ಸೂಚಿಸಿರುವ ಮತ್ತು ಕತ್ರಾವಣೆ ಮಾಡಿ ಲಾಟ್ ಮಾಡಿರುವ ಕರಿಜಾಲಿ ನಾಟ ಮತ್ತು ಉರುವಲು ಸೌದೆಯನ್ನು ಪರಿಶೀಲಿಸಿ ಖಚಿತಪಡಿಸಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಬೇಕು.
6. ಷೆಡ್ಯೂಲ್‌ನಲ್ಲಿ ತೋರಿಸಿರುವ ಪ್ರತಿ ಲಾಟ್‌ಗೆ ಪ್ರತ್ಯೇಕ ಹರಾಜು ಮಾಡಲಾಗುವುದು.
7. ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಿಲೇವಾರಿ ಮಾಡಿಕೊಳ್ಳತಕ್ಕದ್ದು.
8. ನಾಟಗಳನ್ನು ಸಾಗಿಸಲು ಪರವಾನಗಿಯನ್ನು ನೀಡಲಾಗುವುದು. ಪರವಾನಗಿ ಶುಲ್ಕವನ್ನು ಯಶಸ್ವಿ ಬಿಡ್‌ದಾರರು ವಲಯ ಅರಣ್ಯಾಧಿಕಾರಿ, ದೊಡ್ಡಬಳ್ಳಾಪುರರವರಲ್ಲಿ ಜಮಾ ಮಾಡತಕ್ಕದ್ದು.
9. ಅತಿ ಹೆಚ್ಚು ಬಿಡ್‌ದಾರರು ಹರಾಜಿನ ದಿನದಂದೇ ತಾವು ಸೂಚಿಸಿದ ಹರಾಜಿನ ಮೊತ್ತದ ಶೇಕಡ 50 ರಷ್ಟು ಹಣವನ್ನು ಹಾಗೂ ಸೂಚಿಸಿದ ಮೊತ್ತಕ್ಕೆ ಅನ್ವಯಿಸುವ ಪೂರ್ತಿ ತೆರಿಗೆಯನ್ನು ಜಮಾ ಮಾಡತಕ್ಕದ್ದು. ತಪ್ಪಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು 2ನೇ ಬಿಡ್‌ದಾರರು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
10. ಬಿಡ್‌ದಾರರು ಈ ಕಛೇರಿಯಿಂದ ಕಾರ್ಯಾದೇಶ ಪಡೆದ 3 ದಿನಗಳೊಳಗಾಗಿ ನಾಟಾ ಮತ್ತು ಉರುವಲು ಸೌದೆಯನ್ನು ತೆಗೆದುಕೊಂಡು ಹೋಗತಕ್ಕದ್ದು.
11. ಯಶಸ್ವಿ ಬಿಡ್‌ದಾರರಿಗೆ ಆಗುವ ಲಾಭ ಅಥವಾ ನಷ್ಟಗಳಿಗೆ ಇಲಾಖೆ ಜವಾಬ್ದಾರಿಯಲ್ಲ.
12. ಬಹಿರಂಗ ಹರಾಜಿನಲ್ಲಿ ಉದ್ಭವಿಸಬಹುದಾದ ತಂಟೆತಕರಾರುಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
13. ಕಪ್ಪು ಪಟ್ಟಿಯಲ್ಲಿರುವ ಬಿಡ್‌ದಾರರು ಅಥವಾ ದಿವಾಳಿಯಾಗಿರುವವರು ಈ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
14. ಹರಾಜಿನ ನಂತರ ಬರುವ ಬೆಲೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.
15. ಯಾವುದೇ ತಂಟೆ ತಕರಾರುಗಳಿದ್ದಲ್ಲಿ ಹರಾಜು ಪ್ರಾರಂಭಿಸುವ ಎರಡು ಗಂಟೆ ಮುಂಚಿತವಾಗಿ ಸಂಬಂಧಿಸಿದ ಅಧಿಕಾರಿಗಳ ಗಮನಕ್ಕೆ ಲಿಖಿತ ಮೂಲಕ ತರಕ್ಕದ್ದು ಹಾಗೂ ಹರಾಜಿನ ನಂತರ ತಡವಾಗಿ ಬರುವ ಯಾವುದೇ ತರಹದ ದೂರುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.
16. ಯಶಸ್ವಿ ಬಿಡ್‌ದಾರರು ತಮ್ಮ ಬಿಡ್ಡಿನ ಬೆಲೆಯ ಮೇಲೆ ಮಾರಾಟ ತೆರಿಗೆ ಶೇಕಡ 13, ಮಾರಾಟ ತೆರಿಗೆಯ ಮೇಲೆ ಸರ್ಚಾರ್ಜ್ ಶೇಕಡ 15, ಅರಣ್ಯ ಅಭಿವೃದ್ಧಿ ತೆರಿಗೆ ಶೇಕಡ 12, ಆದಾಯ ತೆರಿಗೆ ಶೇಕಡ 15 ಮತ್ತು ಆದಾಯ ತೆರಿಗೆ ಮೇಲೆ ಸೆಸ್ ಶೇಕಡ 5 ರಷ್ಟು ಪಾವತಿಸಬೇಕು.
17. ಯಶಸ್ವಿ ಬಿಡ್‌ದಾರರು ನಿಗದಿತ ಅವಧಿಯಲ್ಲಿ ನಾಟ ಅಥವಾ ಉರುವಲು ಸೌದೆಯನ್ನು ಸಾಗಿಸದಿದ್ದ ಪಕ್ಷದಲ್ಲಿ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಬಿಡ್‌ದಾರರ ಜವಾಬ್ದಾರಿ ಮೇರೆಗೆ ನಾಟ ಮತ್ತು ಉರುವಲು ಸೌದೆಯನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದು ಸರ್ಕಾರಕ್ಕೆ ನಷ್ಟವಾದಲ್ಲಿ ಸೆಕ್ಷನ್ 109ರ ಕರ್ನಾಟಕ ಅರಣ್ಯ ಕಾಯ್ದೆಯಂತೆ ಬಾಕಿ ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಅಥವಾ ಸೆಕ್ಷನ್ 54(54) ಸರಕು ಸಾಮಗ್ರಿಗಳ ಮಾರಾಟದ ಕಾನೂನಿನನ್ವಯ ಅಥವಾ ಸಿವಿಲ್ ಪ್ರೊಸೀಜರ್ ಕೋಡ್ ಅನ್ವಯ ಕ್ರಮ ಕೈಗೊಳ್ಳಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 310 ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರುರವರ ಕಛೇರಿ**
**ಗ್ರಾಮಾಂತರ ವಿಭಾಗದ ವ್ಯಾಪ್ತಿಯ ರಸ್ತೆ ಬದಿಯ ಹುಣಸೆ ಫಸಲಿನ ಸಂಕ್ಷಿಪ್ತ ಟೆಂಡರ್ ಕಂ ಹರಾಜು ಪ್ರಕಟಣೆ**
**ಸಂಖ್ಯೆ: ಎ5ಎಸ್‌ಎಎಸ್.ಟಿಎಂಆರ್.ಸಿಆರ್.33/2004-05, ದಿನಾಂಕ: 1ನೇ ಜುಲೈ 2004**

ಈ ಮೂಲಕ ಸಮಸ್ತ ಜನರಿಗೆ ತಿಳಿಯಪಡಿಸುವುದೇನೆಂದರೆ ಈ ವಿಭಾಗದ ವ್ಯಾಪ್ತಿಯಲ್ಲಿ ಬರುವ ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ಬದಿಯಲ್ಲಿರುವ ಹುಣಸೆ ಫಸಲನ್ನು 2004-05ನೇ ಸಾಲಿಗೆ (ಒಂದು ವರ್ಷ ಅವಧಿಗೆ) ಅಂದರೆ ದಿನಾಂಕ: 1.7.2004 ರಿಂದ 31.6.2005 ರ ಅವಧಿಗೆ ಅಥವಾ ಟೆಂಡರ್ / ಹರಾಜು ಒಪ್ಪಿಗೆಯಾಗಿ ಕರಾರು ಮಾಡಿಕೊಂಡ ದಿನದಿಂದ 30.6.2005 ರವರೆಗೆ ಸಂಗ್ರಹಿಸುವ ಹಕ್ಕನ್ನು ಬೆಂಗಳೂರು ಗ್ರಾಮಾಂತರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿ ಇವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಈ ಕಛೇರಿಯ ವಿವರವುಳ್ಳ ಪ್ರಕಟಣೆಯಲ್ಲಿರುವ ಷರತ್ತುಗಳಿಗನುಗುಣವಾಗಿ ಕೆಳಗೆ ತಪ್ಸೀಲಿನಲ್ಲಿ ಸೂಚಿಸಿರುವ ಪ್ರಕಾರವಾಗಿ ಟೆಂಡರ್ ಕಂ ಹರಾಜಿನ ಮೂಲಕ ಮಾರಾಟ ಮಾಡುವರು. ಇಷ್ಟವುಳ್ಳ ನೋಂದಾಯಿತ ಅರಣ್ಯ ಗುತ್ತಿಗೆದಾರರು ಭಾಗವಹಿಸಿ ಪಡೆಯಬಹುದು.

| ಕ್ರ. ಸಂ. | ಫಸಲನ್ನು ರೂಢಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ/ವೇಳೆ | ಹರಾಜು ದಿನಾಂಕ/ ವೇಳೆ | ಟೆಂಡರ್ ಫಾರಂ ಜೊತೆ ಲಗತ್ತಿಸಬೇಕಾದ ಠೇವಣಿ ಹರಾಜಿನ ಹಣ |
|---|---|---|---|---|---|
| 1 | ದೇವನಹಳ್ಳಿ ತಾ: (ರಾಷ್ಟ್ರೀಯ ಹೆದ್ದಾರಿ ಬಿಟ್ಟು ಎಲ್ಲಾ ಜಿಲ್ಲಾ ಮುಖ್ಯ ರಸ್ತೆಗಳು ದೇವನಹಳ್ಳಿ ತಾಲ್ಲೂಕಿನ ಸರಹದ್ದಿನಲ್ಲಿ ಬರುವ ಎಲ್ಲಾ ಮುಖ್ಯ ರಸ್ತೆಗಳು | ಉಪ ಅರಣ್ಯ ಸಂರಕ್ಷಣಾಧಿಕಾರಿ ಬೆಂಗಳೂರು ಗ್ರಾಮಾಂತರ ವಿಭಾಗ, ಅರಣ್ಯ ಭವನ, 18ನೇ ಕ್ರಾಸ್, ಮಲ್ಲೇಶ್ವರಂ ಬೆಂಗಳೂರು-3 | 4.8.2004 ಮಧ್ಯಾಹ್ನ 3.00 ರಿಂದ 3.30 ವರೆಗೆ ಟೆಂಡರ್ ಕಂ ಹರಾಜನ್ನು ನಡೆಸಲಾಗುವುದು. ಒಂದು ಪಕ್ಷ ಮೇಲ್ಕಂಡ ಅರಣ್ಯ ಉತ್ಪನ್ನ ಟೆಂಡರ್ ಕಂ ಹರಾಜಿನಲ್ಲಿ ಮಾರಾಟವಾಗದಿದ್ದಲ್ಲಿ ದಿನಾಂಕ: 26.8.2004 ರಂದು ಮರು ಟೆಂಡರ್ ಕಂ ಹರಾಜು ನಡೆಸಲಾಗುವುದು. ಒಂದು ವೇಳೆ ಮೇಲ್ಕಂಡ ದಿನಾಂಕದಂದು ಮಾರಾಟವಾಗದಿದ್ದಲ್ಲಿ 23.9.2004 ರಂದು ಮರು ಹರಾಜು ಮಾಡಲಾಗುವುದು | 4.8.2004 ಮಧ್ಯಾಹ್ನ 3.30 ಗಂಟೆ ಯಿಂದ | 1. ರೂ. 5000 ಮೊಬಲಗಿನ ರಾಷ್ಟ್ರೀಕೃತ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ 2. ಹರಾಜಿನಲ್ಲಿ ಭಾಗವಹಿಸುವವರು 5000 ರೂ.ಗಳನ್ನು ಮುಂಚಿತವಾಗಿ ನಗದಾಗಿ ಪಾವತಿಸುವುದು |
| 2 | ಹೊಸಕೋಟೆ ತಾ: (ರಾಷ್ಟ್ರೀಯ ಹೆದ್ದಾರಿ ಬಿಟ್ಟು ಹೊಸಕೋಟೆ ತಾಲ್ಲೂಕಿನ ಸರಹದ್ದಿನಲ್ಲಿ ಬರುವ ಎಲ್ಲಾ ಮುಖ್ಯ ರಸ್ತೆಗಳು) | -”- | -”- | -”- | -”- |
| | ಮಾಗಡಿ ತಾ: (ರಾಷ್ಟ್ರೀಯ ಹೆದ್ದಾರಿ ಬಿಟ್ಟು ಮಾಗಡಿ ತಾಲ್ಲೂಕಿನ ಸರಹದ್ದಿನಲ್ಲಿ ಬರುವ ಎಲ್ಲಾ ಮುಖ್ಯ ರಸ್ತೆಗಳು) | -”- | -”- | -”- | -”- |
| | ನೆಲಮಂಗಲ ತಾ: (ರಾಷ್ಟ್ರೀಯ ಹೆದ್ದಾರಿ ಬಿಟ್ಟು ನೆಲಮಂಗಲ ತಾಲ್ಲೂಕಿನ ಸರಹದ್ದಿನಲ್ಲಿ ಬರುವ ಎಲ್ಲಾ ಮುಖ್ಯ ರಸ್ತೆಗಳು) | -”- | -”- | -”- | -”- |
| | ಚೆನ್ನಪಟ್ಟಣ ತಾ: (ಚೆನ್ನಪಟ್ಟಣ ತಾಲ್ಲೂಕಿನಲ್ಲಿ ಬರುವ ಬೆಂಗಳೂರು ಮೈಸೂರು ರಾಜ್ಯ ಹೆದ್ದಾರಿ ಮತ್ತು ಇದರ ಸರಹದ್ದಿನಲ್ಲಿ ಬರುವ ಮುಖ್ಯ ರಸ್ತೆಗಳು) | -”- | -”- | -”- | -”- |
| | ದೊಡ್ಡಬಳ್ಳಾಪುರ ತಾ: (ರಾಜ್ಯ ಹೆದ್ದಾರಿ ದೊಡ್ಡಬಳ್ಳಾಪುರ ತಾಲ್ಲೂಕು ಸರಹದ್ದಿನಲ್ಲಿ ಬರುವ ಎಲ್ಲಾ ಮುಖ್ಯ ರಸ್ತೆಗಳು) | -”- | -”- | -”- | -”- |

| ಕ್ರ. ಸಂ. | ಫಸಲನ್ನು ರೂಢಿಸುವ ಪ್ರದೇಶ | ಮಾರಾಟ ಮಾಡುವ ಸ್ಥಳ | ಟೆಂಡರ್ ಸ್ವೀಕರಿಸುವ ದಿನಾಂಕ/ವೇಳೆ | ಹರಾಜು ದಿನಾಂಕ/ ವೇಳೆ | ಟೆಂಡರ್ ಫಾರಂ ಜೊತೆ ಲಗತ್ತಿಸಬೇಕಾದ ಠೇವಣಿ ಹರಾಜಿನ ಹಣ |
|---|---|---|---|---|---|
| | ಕನಕಪುರ ತಾಲ್ಲೂಕು (ಕನಕಪುರ ಬೆಂಗಳೂರು ರಾಜ್ಯ ಹೆದ್ದಾರಿ ಹಾಗೂ ಕನಕಪುರ ತಾಲ್ಲೂಕಿನ ಸರಹದ್ದಿನಲ್ಲಿ ಬರುವ ಎಲ್ಲಾ ಜಿಲ್ಲಾ ಮುಖ್ಯ ರಸ್ತೆಗಳು) | ಉಪ ಅರಣ್ಯ ಸಂರಕ್ಷಣಾಧಿಕಾರಿ ಬೆಂಗಳೂರು ಗ್ರಾಮಾಂತರ ವಿಭಾಗ, ಅರಣ್ಯ ಭವನ, 18ನೇ ಕ್ರಾಸ್, ಮಲ್ಲೇಶ್ವರಂ ಬೆಂಗಳೂರು-3 | 4.8.2004 ಮಧ್ಯಾಹ್ನ 3.00 ರಿಂದ 3.30 ವರೆಗೆ ಟೆಂಡರ್ ಕಂ ಹರಾಜನ್ನು ನಡೆಸಲಾಗುವುದು. ಒಂದು ಪಕ್ಷ ಮೇಲ್ಕಂಡ ಅರಣ್ಯ ಉತ್ಪನ್ನ ಟೆಂಡರ್ ಕಂ ಹರಾಜಿನಲ್ಲಿ ಮಾರಾಟವಾಗದಿದ್ದಲ್ಲಿ ದಿನಾಂಕ: 26.8.2004 ರಂದು ಮರು ಟೆಂಡರ್ ಕಂ ಹರಾಜು ನಡೆಸಲಾಗುವುದು. ಒಂದು ವೇಳೆ ಮೇಲ್ಕಂಡ ದಿನಾಂಕದಂದು ಮಾರಾಟವಾಗದಿದ್ದಲ್ಲಿ 23.9.2004 ರಂದು ಮರು ಹರಾಜು ಮಾಡಲಾಗುವುದು | 4.8.2004 ಮಧ್ಯಾಹ್ನ 3.30 ಗಂಟೆ ಯಿಂದ | 1. ರೂ. 5000 ಮೊಬಲಗಿನ ರಾಷ್ಟ್ರೀಕೃತ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ 2. ಹರಾಜಿನಲ್ಲಿ ಭಾಗವಹಿಸುವವರು 5000 ರೂ.ಗಳನ್ನು ಮುಂಚಿತವಾಗಿ ನಗದಾಗಿ ಪಾವತಿಸುವುದು |
| ರಾಷ್ಟ್ರೀಯ ಹೆದ್ದಾರಿ ಸಂಖ್ಯೆ 209 ಕಿ.ಮೀ. 30 ರಿಂದ 86 ಕಿ.ಮೀ. ವರೆಗೆ ಮತ್ತು ಕನಕಪುರ ಸಾತನೂರು ಪಟ್ಟಣಗಳ ಮೇಲೆ ಹಾದು ಹೋಗುವ ಮಾರ್ಗದಲ್ಲಿರುವ ರಸ್ತೆ ಬದಿಯ ಹುಣಸೆ ಮರಗಳನ್ನು ಹೊರತುಪಡಿಸಿ | | | | | |
| | ರಾಮನಗರ ತಾಲ್ಲೂಕು (ರಾಮನಗರ ತಾಲ್ಲೂಕಿನಲ್ಲಿ ಬರುವ ಬೆಂಗಳೂರು ಮೈಸೂರು ರಾಜ್ಯ ಹೆದ್ದಾರಿ ಮತ್ತು ಇದರ ಸರಹದ್ದಿನಲ್ಲಿ ಬರುವ ಎಲ್ಲಾ ಮುಖ್ಯ ರಸ್ತೆಗಳು) | | | | |

**ಷರತ್ತುಗಳು**

1. ರೂ. 200/- ಮತ್ತು ಇತರೆ ತೆರಿಗೆಗಳನ್ನು ಸಂದಾಯ ಮಾಡಿ ದಿನಾಂಕ: 4.8.2004 ರ ಮಧ್ಯಾಹ್ನ 1.00 ಗಂಟೆಯವರೆಗೆ ಬೆಂಗಳೂರು ಗ್ರಾಮಾಂತರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಇವರಿಂದ ಟೆಂಡರ್ ಫಾರಂ ಪಡೆಯಬಹುದು. ಭರ್ತಿ ಮಾಡಿದ ಫಾರಂ ಮೇಲೆ ರೂ. 2.00 ಕೋರ್ಟ್ ಫೀ ಸ್ಟಾಂಪನ್ನು ಅಂಟಿಸತಕ್ಕದ್ದು. ಹಾಗೆಯೇ ಟೆಂಡರ್ ಫಾರಂನ ಜೊತೆ 5000.00 (ಐದು ಸಾವಿರ) ಮೊಬಲಗಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್ ಡಿ.ಡಿ ಯನ್ನು ಪ್ರತಿ ಟೆಂಡರಿಗೆ ಬೆಂಗಳೂರು ಗ್ರಾಮಾಂತರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಹೆಸರಿನಲ್ಲಿ ತೆಗೆದು ಇ.ಎಂ.ಡಿ. ಯಾಗಿ ಲಗತ್ತಿಸತಕ್ಕದ್ದು. ಹಾಗೆಯೇ ಈ ಹರಾಜಿನಲ್ಲಿ ಭಾಗವಹಿಸುವವರು ಸಹಾ ರೂ. 5000.00 (ಐದು ಸಾವಿರ) ಗಳನ್ನು ನಗದು ರೂಪದಲ್ಲಿ ಇ.ಎಂ.ಡಿ. ಯನ್ನು ಹರಾಜಿಗೆ ಮುನ್ನ ಕೊಡತಕ್ಕದ್ದು.
2. ಬೆಂಗಳೂರು ಗ್ರಾಮಾಂತರ ವಿಭಾಗದಲ್ಲಿ 2004-05ನೇ ಸಾಲಿಗೆ ನೋಂದಾಯಿಸಿದ ಹಾಗೂ ಅರ್ಹತೆ ಪಡೆದಿರುವ ಅರಣ್ಯ ಗುತ್ತಿಗೆದಾರರಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿದೆ.
3. ಹಿಂದಿನ ಯಾವುದೇ ಹರಾಜಿನಲ್ಲಿ ಪಡೆದ ಫಸಲಿನ ಬಾಬ್ತು ಯಾವುದೇ ಹಣ ಬಾಕಿಯಿರುವ ಗುತ್ತಿಗೆದಾರರು ಮೇಲಿನ ಟೆಂಡರ್: ಹರಾಜಿನಲ್ಲಿ ಭಾಗವಹಿಸುವುದಕ್ಕಾಗಲಿ ಅವಕಾಶವಿರುವುದಿಲ್ಲ.
4. ಬ್ಲಾಕ್ ಲಿಸ್ಟ್ ಆಗಿರುವವರು, ಇನ್‌ಸಾಲ್ವೆಂಟ್ಸ್, ಡಿಫಾಲ್ಟರ್ಸ್ ಮತ್ತು ಮೈನರ್ಸ್ ಟೆಂಡರ್ ಸಲ್ಲಿಸುವುದಕ್ಕಾಗಲೀ ಅಥವಾ ಭಾಗವಹಿಸುವುದಕ್ಕಾಗಲೀ ಅರ್ಹರಾಗಿರುವುದಿಲ್ಲ.
5. ಈ ಹರಾಜಿನ ಟೆಂಡರ್‌ಗಳನ್ನಾಗಲೀ, ಹರಾಜನ್ನಾಗಲೀ ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪಡೆದಿರುತ್ತಾರೆ.
6. ಒಪ್ಪಿಕೊಳ್ಳಲಾದ ಟೆಂಡರ್ : ಹರಾಜಿನ 1/2 ಭಾಗ ಹಣವನ್ನು ಪೂರ್ಣವಾಗಿ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳೊಂದಿಗೆ ಸ್ಥಳದಲ್ಲಿ ಟೆಂಡರ್ - ಕಂ - ಹರಾಜು ದಿನದಂದೇ ಪಾವತಿ ಮಾಡಬೇಕು. ಇನ್ನು ಮಿಕ್ಕ 1/2 ಭಾಗ ಹಣವನ್ನು ಕರಾರು ಮಾಡಿಕೊಡುವ ದಿನ ಅಥವಾ ಮುಂಚಿತವಾಗಿ ಪಾವತಿಸಬೇಕು. ಇಲ್ಲದಿದ್ದಲ್ಲಿ ಅವರ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆಯಲ್ಲದೇ ಯೂನಿಟ್‌ನ್ನು ಅವರ ಜವಾಬ್ದಾರಿಯಲ್ಲಿ ಹರಾಜು ಮಾಡಲಾಗುವುದು.
7. ಮೇಲ್ಕಂಡ ಟೆಂಡರ್ ಹರಾಜಿನಲ್ಲಿ ಭಾಗವಹಿಸುವ ಮುನ್ನ ಅರಣ್ಯ ಗುತ್ತಿಗೆದಾರರು ಆಯಾಯ ತಾಲ್ಲೂಕಿನ ವಲಯ ಅರಣ್ಯಾಧಿಕಾರಿಯವರನ್ನು ಸಂಪರ್ಕಿಸಿ ರಸ್ತೆ ಬದಿಯಲ್ಲಿರುವ ಹುಣಿಸೆ ಫಸಲನ್ನು ನೋಡಲು ಅನುಮತಿ ಪಡೆದು ಫಸಲನ್ನು ಪರಿಶೀಲಿಸಿಕೊಳ್ಳಬೇಕು.
8. ಈ ಟೆಂಡರ್-ಕಂ-ಹರಾಜಿಗೆ ಸಂಬಂಧಿಸಿದಂತೆ ಬೇಕಾದ ಇತರೆ ಮಾಹಿತಿಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.
9. ಟೆಂಡರ್-ಕಂ-ಹರಾಜಿನಲ್ಲಿ ಒಪ್ಪಿಗೆಯಾದ ಟೆಂಡರ್ : ಹರಾಜಿನ ಅರಣ್ಯ ಗುತ್ತಿಗೆದಾರರಿಗೆ ಸದರಿ ಪ್ರದೇಶದ ಬೆಳೆಯನ್ನು ತೆಗೆಯಲು ಟೆಂಡರ್ - ಹರಾಜು ಸಂಬಂಧಿಸಿದ ಅಧಿಕಾರಿಗಳಿಂದ ದೃಢೀಕೃತವಾದ ನಂತರ ಹಾಗೂ ಸದರಿ ಗುತ್ತಿಗೆದಾರರು ನಿಗದಿತ ಛಾಪಾ ಕಾಗದದ ಮೇಲೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು, ಇವರೊಂದಿಗೆ ಕರಾರು ಮಾಡಿಕೊಂಡ ಮೇಲೆ ಅನುಮತಿ ನೀಡಲಾಗುವುದು.
10. ಪ್ರತಿ ತಾಲ್ಲೂಕಿಗೆ ಬೇರೆ ಬೇರೆ ಟೆಂಡರ್ ಫಾರಂನ್ನು ನಿಗದಿತ ಇ.ಎಂ.ಡಿ. ಲಗತ್ತಿಸಿ ಉಪಯೋಗಿಸಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

ಪಿ.ಆರ್. 311